## ಕರ್ನಾಟಕ ವಿಧಾನ ಪರಿಷತ್

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 716 (767) |
| ಮಾನ್ಯ ಸದಸ್ಯರ ಹೆಸರು | : | ಶ್ರೀ ಸುನೀಲ್ ಸುಬ್ರಮಣಿ ಎಂ.ಪಿ. (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | : | 15-12-2020 |
| ಉತ್ತರಿಸುವ ಸಚಿವರು | : | ಮಾನ್ಯ ಪೌರಾಡಳಿತ, ತೋಟಗಾರಿಕೆ ಮತ್ತು ರೇಷ್ಮೆ ಸಚಿವರು. |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಮಡಿಕೇರಿ ನಗರದಲ್ಲಿ ಉತ್ಪತ್ತಿಯಾಗುವ ಕಸವನ್ನು ನಗರಸಭೆಯವರು ಯಾವ ರೀತಿಯಲ್ಲಿ ವಿಲೇವಾರಿ ಮಾಡುತ್ತಿರುತ್ತಾರೆ; (ಪೂರ್ಣ ಮಾಹಿತಿ ನೀಡುವುದು) | • ಮಡಿಕೇರಿ ನಗರಸಭೆ ವ್ಯಾಪ್ತಿಯಲ್ಲಿ ಪ್ರತಿದಿನ 23 ಟನ್ ತ್ಯಾಜ್ಯ ಸಂಗ್ರಹವಾಗುತ್ತಿದ್ದು, ಮಡಿಕೇರಿಯ ಕರ್ಣಂಗೇರಿ ಗ್ರಾಮದ ಸರ್ವೆ ನಂ. 471/1P16 ರಲ್ಲಿ 6 ಎಕರೆ ಸಂಸ್ಕರಣೆ ಜಾಗದಲ್ಲಿ ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯಿಂದ ಪಡೆದಿರುವ ಅಧಿಕೃತ ಪತ್ರವನ್ನು ಅನುಸರಿಸಿ ತ್ಯಾಜ್ಯ ವಿಲೇವಾರಿಯನ್ನು ಮಾಡಲು ಕ್ರಮ ವಹಿಸಲಾಗುತ್ತಿದೆ.<br>• 8 ರಿಂದ 10 ಟನ್ ಹಸಿತ್ಯಾಜ್ಯವನ್ನು compost pits ಗಳಲ್ಲಿ ಕೊಳೆಸಿ ಗೊಬ್ಬರವಾಗಿ ಪರಿವರ್ತಿಸಲು ಕ್ರಮವಹಿಸಲಾಗುತ್ತಿದೆ.<br>• 10 ರಿಂದ 13 ಟನ್ ಒಣ ತ್ಯಾಜ್ಯವನ್ನು ಪ್ರತ್ಯೇಕವಾಗಿ ಸಂಗ್ರಹಿಸಿ, ಪ್ಲಾಸ್ಟಿಕ್ ತ್ಯಾಜ್ಯವನ್ನು ಬೇಲ್ ಮಾಡಿ ಹತ್ತಿರದ ಪುನರ್ಬಳಕೆದಾರರಿಗೆ ನೀಡಲು ಕ್ರಮವಹಿಸಲಾಗಿದೆ. |
| (ಆ) | ಹಸಿ ಮತ್ತು ಒಣ ಕಸವನ್ನು ಯಾವ ರೀತಿಯಲ್ಲಿ ಬೇರ್ಪಡಿಸಲಾಗುತ್ತಿದೆ, ಬೇರ್ಪಡಿಸಿದ ಒಣ ಕಸವನ್ನು ಏನು ಮಾಡಲಾಗುತ್ತಿದೆ; (ವಿವರ ನೀಡುವುದು) | • ಮಡಿಕೇರಿ ನಗರಸಭೆ ವ್ಯಾಪ್ತಿಯಲ್ಲಿ ಪ್ರತಿ ಮನೆ ಮನೆಯಿಂದ ತ್ಯಾಜ್ಯ ಸಂಗ್ರಹಿಸುವ ಆಟೋಟಿಪ್ಪರ್ ಹಾಗೂ ಟ್ರ್ಯಾಕ್ಟರ್‌ಗಳಲ್ಲಿ ಹೆಚ್ಚುವರಿ ಬಿನ್‌ಗಳನ್ನು ಅಳವಡಿಸಿ ತ್ಯಾಜ್ಯವನ್ನು ಪ್ರತ್ಯೇಕವಾಗಿ ಸಂಗ್ರಹಿಸುವ ಸೌಲಭ್ಯವನ್ನು ಒದಗಿಸಿ ಮೂಲದಲ್ಲಿಯೇ ಕಸವನ್ನು ಬೇರ್ಪಡಿಸಲು ಕ್ರಮವಹಿಸಲಾಗಿದೆ.<br>• ಹಸಿತ್ಯಾಜ್ಯವನ್ನು ಬೇರ್ಪಡಿಸಿ ಗೊಬ್ಬರವಾಗಿ ಪರಿವರ್ತಿಸಲಾಗುತ್ತಿದೆ.<br>• ಒಣ ತ್ಯಾಜ್ಯದಲ್ಲಿ ಕಾಗದ, ಕಾರ್ಡ್‌ಬೋರ್ಡ್, ಕಾರ್ಟನ್ ಬಾಕ್ಸ್, ಪ್ಲಾಸ್ಟಿಕ್ / ಗಾಜಿನ ಬಾಟಲ್‌ಗಳು, ಕಬ್ಬಿಣಗಳಂತಹ ಮರುಬಳಕೆ ಮಾಡಬಹುದಾದ ತ್ಯಾಜ್ಯವನ್ನು ಸ್ಥಳೀಯ ಮರುಬಳಕೆದಾರರಿಗೆ ಪ್ರತಿನಿತ್ಯ ಕನಿಷ್ಠ 100 ಕೆ.ಜಿ. ಗಳಷ್ಟು ನೀಡಲಾಗುತ್ತಿದೆ.<br>• ಘನತ್ಯಾಜ್ಯವನ್ನು ವಿಕೇಂದ್ರೀಕೃತವಾಗಿ ಸಂಸ್ಕರಣೆ ಮಾಡುವ ಉದ್ದೇಶದಿಂದ ಹಸಿ ತ್ಯಾಜ್ಯವನ್ನು ಮೂಲದಲ್ಲೇ |

| | | |
|---|---|---|
| | | ಸಂಸ್ಕರಿಸಲು ಸಾರ್ವಜನಿಕರಲ್ಲಿ ಹೋಂ/ ಸಮುದಾಯಿಕ ಕಾಂಪೋಸ್ಟಿಂಗ್‌ನ್ನು ಅಳವಡಿಸಿ ಕೊಳ್ಳುವಂತೆ ಹೆಚ್ಚಿನ ಅರಿವು ಮೂಡಿಸುವ ಕಾರ್ಯಕ್ರಮಗಳನ್ನು ನಿರಂತರವಾಗಿ ಕೈಗೊಳ್ಳಲಾಗುತ್ತಿದೆ.<br>• ವಿಕೇಂದ್ರೀಕೃತವಾಗಿ ತ್ಯಾಜ್ಯ ಸಂಸ್ಕರಣೆ ಮಾಡಲು ನಗರಸಭೆ ವ್ಯಾಪ್ತಿಯಲ್ಲಿ ಗುರುತಿಸಿರುವ ಜಾಗಗಳ ವಿವರ ಈ ಕೆಳಕಂಡಂತಿದೆ.<br>1) ದಾಸವಾಳ ರಸ್ತೆ, ಪಿ.ಐ.ಡಿ ನಂ: 4-1-504-37, ವಿಸ್ತೀರ್ಣ: 125 x 110 ಅಡಿಗಳು<br>2) ಹೆಲ್ತ್ ಕಚೇರಿ ಹತ್ತಿರ: ಪಿ.ಐ.ಡಿ ನಂ: 14-3-519-7, ವಿಸ್ತೀರ್ಣ 60x40 ಅಡಿಗಳು<br>• ಮೇಲ್ಕಂಡ ಎರಡು ಸ್ಥಳಗಳಲ್ಲಿ ಎರಡು ಶೆಡ್‌ಗಳನ್ನು ನಿರ್ಮಾಣ ಮಾಡಲು ಯೋಜನೆ ರೂಪಿಸಲಾಗಿದ್ದು, ಇದರ ಅಂದಾಜು ಮೊತ್ತ ರೂ. 30.00 ಲಕ್ಷಗಳಾಗಿರುತ್ತದೆ. ಹಾಗೂ ಸುಮಾರು 6 ಟನ್‌ಗಳಷ್ಟು ಒಣ ತ್ಯಾಜ್ಯವನ್ನು ಸಂಸ್ಕರಿಸಲು ಕ್ರಮವಹಿಸಲಾಗುತ್ತಿದೆ. ಸದರಿ ಘಟಕಗಳಲ್ಲಿ ಬೇಲಿಂಗ್ ಯಂತ್ರ ಹಾಗೂ ಮಾನವ ಸಂಪನ್ಮೂಲಗಳನ್ನು ಬಳಸಿಕೊಂಡು ಒಣತ್ಯಾಜ್ಯ ಸಂಸ್ಕರಣೆ ಮಾಡಲು ಉದ್ದೇಶಿಸಲಾಗಿದೆ.<br>• ಪೌರಕಾರ್ಮಿಕರಿಗೆ ತ್ಯಾಜ್ಯವನ್ನು ಮೂಲದಲ್ಲಿಯೇ ವಿಂಗಡಣೆ ಮಾಡುವ ಕುರಿತಾಗಿ ತರಬೇತಿಯನ್ನು ನೀಡಲಾಗಿದೆ. |
| (ಇ) | ಕಸ ವಿಲೇವಾರಿಗಾಗಿ ಹೊಸ ಜಾಗವನ್ನು ನಿಗದಿ ಮಾಡಲಾಗಿದೆಯೇ; ಹಾಗಿದ್ದಲ್ಲಿ ಅದರ ವಿವರಗಳನ್ನು ನೀಡುವುದು. | • ಘನತ್ಯಾಜ್ಯ ವಿಲೇವಾರಿಗಾಗಿ 2ನೇ ಮೊಣ್ಣಂಗೇರಿ ಗ್ರಾಮದ ಸರ್ವೆ ನಂ. 20/1 ರಲ್ಲಿ 30 ಎಕರೆ ಪ್ರದೇಶವನ್ನು ಗುರುತಿಸಿದ್ದು, ಜಿಲ್ಲಾಧಿಕಾರಿಗಳು, ಕೊಡಗು ಜಿಲ್ಲೆ ರವರಲ್ಲಿ ಪರಿಶೀಲನೆಯ ಹಂತದಲ್ಲಿರುತ್ತದೆ. |

ಸಂಖ್ಯೆ: ನಅಇ 337 ಸಿಎಸ್‌ಎಸ್ 2020

(ಡಾ|| ನಾರಾಯಣಗೌಡ)
ಮಾನ್ಯ ಪೌರಾಡಳಿತ ಹಾಗೂ
ತೋಟಗಾರಿಕೆ ಮತ್ತು ರೇಷ್ಮೆ ಸಚಿವರು.